# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 882 (830) |
| ಮಾನ್ಯ ಸದಸ್ಯರ ಹೆಸರು | ಶ್ರೀ ಬಿ. ಜಿ. ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 20.09.2021 |
| ಉತ್ತರಿಸಬೇಕಾದ ಸಚಿವರು | ಮಾನ್ಯ ಆರೋಗ್ಯ & ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕಲಬುರಗಿ ಜಿಮ್ಸ್ ಆಸ್ಪತ್ರೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಜಯದೇವ ಆಸ್ಪತ್ರೆಗೆ ಹೊಸ ಕಟ್ಟಡ ನಿರ್ಮಾಣ ಕಾರ್ಯ ಪ್ರಾರಂಭವಾಗಿದ್ದು, ಈ ಕಟ್ಟಡದ ಕಾಮಗಾರಿಯು ಯಾವಾಗ ಪೂರ್ಣಗೊಳ್ಳಲಿದೆ; (ವಿವರ ನೀಡುವುದು) | ಕಲಬುರಗಿ ಜಿಲ್ಲಾ ಆರೋಗ್ಯಾಧಿಕಾರಿಗಳ ಕಛೇರಿ ಆವರಣದಲ್ಲಿ ಉದ್ದೇಶಿತ 300 ಹಾಸಿಗೆಗಳ ಜಯದೇವ ಆಸ್ಪತ್ರೆ ಕಟ್ಟಡ ಕಾಮಗಾರಿಗೆ ಸಂಬಂಧಿಸಿದಂತೆ ಟೆಂಡರ್ ನಿಯಮಾನುಸಾರ ಮೆ॥ ಹರ್ಷ ಕನ್ಸ್ಟ್ರಕ್ಷನ್ಸ್, ನಾಸಿಕ್‌ರವರಿಗೆ ದಿನಾಂಕ:24.11.2020 ರಂದು ರೂ.153ಕೋಟಿ (+12% ಜಿಎಸ್‌ಟಿ)ಗೆ ಕಟ್ಟಡ ಕಾಮಗಾರಿ ಗುತ್ತಿಗೆಯನ್ನು ನೀಡಲಾಗಿರುತ್ತದೆ.<br><br>ಟೆಂಡರ್ ಕಾರ್ಯಾದೇಶದಂತೆ ಸದರಿ ಆಸ್ಪತ್ರೆ ಕಟ್ಟಡವನ್ನು 30 ತಿಂಗಳುಗಳಲ್ಲಿ ಪೂರ್ಣಗೊಳಿಸಬೇಕಾಗಿರುತ್ತದೆ. ಅದರಂತೆ ಕಾಮಗಾರಿ ಗುತ್ತಿಗೆದಾರರು ದಿನಾಂಕ:19.01.2021ರಂದು ಕಟ್ಟಡ ಕಾಮಗಾರಿಯನ್ನು ಪ್ರಾರಂಭಿಸಿದ್ದು ದಿನಾಂಕ:19.07.2023ರಲ್ಲಿ ಪೂರ್ಣಗೊಳಿಸಲು ಉದ್ದೇಶಿಸಿದೆ. ಪ್ರಸ್ತುತ ಕಾಮಗಾರಿ ಗುತ್ತಿಗೆದಾರರು ಆಸ್ಪತ್ರೆ ಕಟ್ಟಡ ಕಾಮಗಾರಿಗೆ ಸಂಬಂಧಿಸಿದಂತೆ ರೂ.6.90 ಕೋಟಿಗಳ ಆರ್ಥಿಕ ಪ್ರಗತಿಯನ್ನು ಸಾಧಿಸಿರುತ್ತಾರೆ. |
| (ಆ) | ಜಯದೇವ ಆಸ್ಪತ್ರೆ ಸ್ವಂತ ಕಟ್ಟಡದಲ್ಲಿ ಎಂದಿನಿಂದ ಕಾರ್ಯಾರಂಭ ಮಾಡಲಿದೆ? (ವಿವರ ನೀಡುವುದು) | ಕಲಬುರಗಿ ಜಿಲ್ಲಾ ಆರೋಗ್ಯಾಧಿಕಾರಿಗಳ ಕಛೇರಿ ಆವರಣದಲ್ಲಿ ಉದ್ದೇಶಿತ 300 ಹಾಸಿಗೆಗಳ ಜಯದೇವ ಆಸ್ಪತ್ರೆ ಕಟ್ಟಡ ಕಾಮಗಾರಿಯು ಪ್ರಗತಿಯಲ್ಲಿದ್ದು, ಆಸ್ಪತ್ರೆಯ ಕಟ್ಟಡವು ದಿನಾಂಕ:19.07.2023 ರ ನಂತರ ಸಾರ್ವಜನಿಕ ಸೇವೆಗೆ ಲಭ್ಯವಾಗಲಿದೆ. |

**ಕಡತ ಸಂ: ಎಂಇಡಿ 352 ಎಂ ಎಸ್ ಎಫ್ 2021**

**(ಡಾ|| ಕೆ. ಸುಧಾಕರ್)**
**ಆರೋಗ್ಯ & ಕುಟುಂಬ ಕಲ್ಯಾಣ ಹಾಗೂ**
**ವೈದ್ಯಕೀಯ ಶಿಕ್ಷಣ ಸಚಿವರು.**